# ಸಾಮಾಜಿಕ ಗ್ರಹಿಕೆಗಳ ಬದಲಾವಣೆ

**ಪ್ರತಿಭಾ ಕಟಿಯಾರ್**



'ಸರ್ಕಾರಿ ಸಂಸ್ಥೆಗಳಲ್ಲಿ ಶಿಕ್ಷಕರು ಕೆಲಸ ಮಾಡೋದಿಲ್ಲ; ಅವರದು ಆರಾಮದ ಕೆಲಸ; ಬೇಕಾದಷ್ಟು ರಜೆಗಳು: ದಿನವಿಡೀ ಸ್ವೆಟರ್ ಹೆಣೆಯುತ್ತಲೋ ಕಡಲೆಕಾಯಿ ಮೆಲ್ಲುತ್ತಲೋ ಸೋಮಾರಿಗಳಾಗಿರುತ್ತಾರೆ; ಎಲ್ಲೋ ವಾರಕ್ಕೊಮ್ಮೆ ಅವರು ಕಲಿಸಲು ಮನಸ್ಸು ಮಾಡಿದರೂ ಅದು ವಿದ್ಯಾರ್ಥಿಗಳ ಅದೃಷ್ಟ; ಕಡೆಗೂ ಈ ಶಾಲೆಗಳ ವಿದ್ಯಾರ್ಥಿಗಳು ಸಾಧಿಸುವುದಾದರೂ ಏನಿದೆ? ತಾವು ಬೆಳೆಯಬೇಕು, ಪ್ರತಿಷ್ಠಿತವಾದ, ಕೌಶಲ್ಯವನ್ನು ಬೇಡುವ ಉದ್ಯೋಗಗಳನ್ನು ಹಿಡಿಯಬೇಕು ಎನ್ನುವುದಂತೂ ಏನಿಲ್ಲವಲ್ಲ.'

ಇವುಗಳು ಮತ್ತು ಇಂತಹುದೇ ಇನ್ನೂ ಹಲವು ಗ್ರಹಿಕೆಗಳು ನಮ್ಮ ಸುತ್ತಲೂ ಈಗಲೂ ಕಂಡುಬರುತ್ತವೆ. ಹುಡುಗಿಯರಿಗೆ ದೊಡ್ಡವರಾದ ಮೇಲೆ ಶಿಕ್ಷಕ ವೃತ್ತಿ ಹಿಡಿ ಎಂದೇ ಸಲಹೆ ನೀಡಲಾಗುತ್ತದೆ. ಏಕೆಂದರೆ ಸಾಪೇಕ್ಷವಾಗಿ ಇದು ವಿರಾಮದ ವೃತ್ತಿ, ಮನೆಯನ್ನೂ ಕುಟುಂಬವನ್ನೂ ನೋಡಿಕೊಳ್ಳಲು ಸಾಕಷ್ಟು ಸಮಯ ದೊರಕುವ ಕೆಲಸ ಎಂದೇ ಎಲ್ಲರೂ ತಿಳಿದಿದ್ದಾರೆ. ಕಾಲ ಬದಲಾಗುತ್ತಿದೆ ಎನ್ನುವುದೇನೋ ನಿಜ. ಆದರೆ ಬದಲಾಗುತ್ತಿರುವ ಕಾಲಕ್ಕೆ ತಕ್ಕಂತೆ ಕಲಿಸುವುದು ಮತ್ತು ಶಿಕ್ಷಕರ ಬಗೆಗಿನ ಸಾಮಾಜಿಕ ಗ್ರಹಿಕೆಗಳೂ ಬದಲಾಗುತ್ತಿವೆಯೇ ಎನ್ನುವುದನ್ನೂ ಕೇಳಿಕೊಳ್ಳಬೇಕು. ಬೇರೆ ರಾಜ್ಯಗಳ ಬಗ್ಗೆ ನನಗೆ ಅಷ್ಟಾಗಿ ತಿಳಿದಿಲ್ಲ; ಆದರೆ ಉತ್ತರಾಖಂಡ್ ರಾಜ್ಯದಲ್ಲಿನ ನನ್ನ ಅನುಭವಗಳ ಆಧಾರದ ಮೇಲೆ ಹೇಳುವುದಾದರೆ ಈ ಬಗೆಯ ಸಾಮಾನ್ಯ ಗ್ರಹಿಕೆಗಳು ಅಸಮಂಜಸವಾಗುತ್ತಿವೆ. ಶಿಕ್ಷಕರಿಗೀಗ ಚಳಿಗಾಲದ ಬೆಚ್ಚನೆಯ ಬಿಸಿಲಲ್ಲಿ ವಿರಾಮವಾಗಿ ಕಡಲೆಕಾಯಿ ಮೆಲ್ಲುತ್ತ ಕುಳಿತಿರಲು ಸಮಯವೂ ಇಲ್ಲ, ತಮ್ಮ ಕೆಲಸವನ್ನು ಅವರು ಆ ಮನೋಭಾವದಿಂದ ನೋಡುವುದೂ ಇಲ್ಲ. ಅವರೀಗ ತಮ್ಮ ವಿದ್ಯರ್ಥಿಗಳೊಂದಿಗೆ ಸಾಕಷ್ಟು ಸಮಯವನ್ನು ಕಳೆಯಲು ಉತ್ಸುಕರಾಗಿದ್ದಾರೆ; ಅವರಿಗೆ ಕಲಿಸುವ ಹೊಸ ಹೊಸ ಮರ್ಗಗಳನ್ನು ಕಂಡುಕೊಳ್ಳುತ್ತಿದ್ದಾರೆ.

ಉತ್ತರಾಖಂಡದ ಭೌಗೋಳಿಕ ಪರಿಸ್ಥಿತಿ ಭಾರತದ ಇನ್ನಾವುದೇ ರಾಜ್ಯಕ್ಕಿಂತ ತೀರ ಭಿನ್ನವಾಗಿದೆ. ಕೇವಲ ಬೆಂಗಳೂರಿನಲ್ಲೋ ದೆಹಲಿಯಲ್ಲೋ ಕುಳಿತು ಗೂಗಲ್ ನಲ್ಲಿ ಹುಡುಕಾಡಿ ಅಲ್ಲಿಯ ಸನ್ನಿವೇಶಗಳು ಅದೆಷ್ಟು ಬೇರೆಯಾಗಿವೆ ಅಥವಾ ಕಷ್ಟಕರವಾಗಿವೆ ಎನ್ನುವುದನ್ನು ತಿಳಿಯಲಾಗುವುದಿಲ್ಲ. ಅದು ನದಿಯ ತೀರದಲ್ಲಿ ಸುರಕ್ಷಿತವಾಗಿ ಕುಳಿತು ನದಿಯ ಆಳದ ಬಗ್ಗೆ ಯೋಚಿಸಿದಂತೆ. ಅದು ಅಸಾಧ್ಯವೇಕೆಂದರೆ ನದಿಯ ಆಳ ಎಷ್ಟಿದೆ ಎಂದು ತಿಳಿಯಲು ನೀರಿನಲ್ಲಿ ಇಳಿಯಬೇಕಾಗುತ್ತದೆ. ಹೀಗಾಗಿ ರಾಜ್ಯದ ದೂರದ ಮೂಲೆಗಳಲ್ಲಿರುವ ಸರ್ಕಾರಿ ಶಾಲೆಗಳ ಪರಿಸ್ಥಿತಿಯನ್ನು ನಿಜವಾಗಿಯೂ ಅರ್ಥಮಾಡಿಕೊಳ್ಳಬೇಕೆಂದಿದ್ದರೆ ನಿಜಕ್ಕೂ ಆ ಸ್ಥಳಗಳಿಗೆ ಭೇಟಿ ನೀಡಬೇಕಾಗುತ್ತದೆ.

ಅಲ್ಲಿ ಶಾಲೆಯನ್ನು ತಲುಪುವಷ್ಟರಲ್ಲೇ ಮಗು ಏದುಸಿರು ಬಿಡುತ್ತಿರುತ್ತದೆ; ಇನ್ನೊಂದು ಹೆಜ್ಜೆ ಇಡುವುದು ಕೂಡ ಅಸಾಧ್ಯವೆನಿಸಿರುತ್ತದೆ. ಆದರೆ ಶಿಕ್ಷಕರೂ ವಿದ್ಯಾರ್ಥಿಗಳೂ ಪ್ರತಿದಿನ ಶಾಲೆಯನ್ನು ತಲಪಲು ಇದೇ ರಸ್ತೆಗಳಲ್ಲೇ ಮೈಲುಗಟ್ಟಲೆ ಪಯಣಿಸುತ್ತಾರೆ ಎನ್ನುವುದನ್ನು ನೆನಪಿಡಬೇಕು. ಶಿಕ್ಷಣವನ್ನು ಕುರಿತು ಆರಾಮಾಗಿ ಕುಳಿತು ತೀರ್ಮಾನಗಳನ್ನು ತೆಗೆದುಕೊಳ್ಳುವವರ ಮನಸ್ಸಿನಲ್ಲಿ ಈ ದರ್ಗಮ ಭೂಪ್ರದೇಶಗಳೂ ರಸ್ತೆಗಳೂ ಇವೆಯೇ? ಈ ಜನರ ಪ್ರತಿದಿನದ ಸುದೀರ್ಘ ಪಯಣ, ದೈನಂದಿನ ಸಂಕಷ್ಟಗಳು ಇವುಗಳ ಬಗ್ಗೆ ಅವರಿಗೆ ಅರಿವಿದೆಯೇ? ಈಗ ಪರಿಸ್ಥಿತಿ ಸುಧಾರಿಸಿದೆ; ರಸ್ತೆಗಳನ್ನು ನಿರ್ಮಿಸಲಾಗಿದೆ. ಆದರೆ ಅವು ಮುಳ್ಳುಗಳಿಂದ ಅಪಾಯಗಳಿಂದ ಕೂಡಿದ ಕೆಸರು ತುಂಬಿದ ಜಾರುವ ದೂರದ ರಸ್ತೆಗಳು. ಆದರೂ ಕನಿಷ್ಠ ರಸ್ತೆಗಳಾದರೂ ಇವೆ! ಇನ್ನೂ ರಸ್ತೆಯೇ ಇಲ್ಲದ ಶಾಲೆಗಳ ಗತಿ ಏನು?

ಇಂತಹ ಕಡೆಗಳಲ್ಲಿ ಶಾಲೆಗೆ ಹೋಗುವುದೇ ಒಂದು ಸಾಧನೆ ಎನಿಸುತ್ತದೆ. ಶಾಲೆಯ ಅನುಭವಲೋಕ ತೆರೆದುಕೊಳ್ಳುವುದು ಇಷ್ಟೆಲ್ಲ ಆದಮೇಲೆಯೇ. ಕೆಲವು ಶಾಲೆಗಳಲ್ಲಿ ಮಕ್ಕಳು ಇಂಗ್ಲಿಷ್ ಮತ್ತು ಹಿಂದಿ ಎರಡರಲ್ಲೂ ಚುರುಕಾಗಿ ಮಾತನಾಡುತ್ತಾರೆ; ಮುಕ್ತವಾಗಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ; ಪ್ರಶ್ನೆಗಳನ್ನು ಕೇಳುತ್ತಾರೆ. ಈ ಮಕ್ಕಳಿಗೆ ಸಮವಸ್ತ್ರಗಳಿವೆ; ರುಚಿಕರವಾದ ತಾಜಾ ತರಕಾರಿಗಳಿಂದ ಸಿದ್ಧಪಡಿಸಿದ ಮಧ್ಯಾಹ್ನದ ಊಟ ದೊರಕುತ್ತದೆ; ತಮ್ಮ ವಿದ್ಯಾರ್ಥಿಗಳೊಂದಿಗೆ ಅಪಾರ ಪ್ರೀತಿಯಿಂದ ಕೆಲಸ ಮಾಡುವ ನವೀನ ಬೋಧನಾ ವಿಧಾನವನ್ನು ಹೊಂದಿರುವ ಶಿಕ್ಷಕರಿದ್ದಾರೆ.

ಪರಿಸರವನ್ನು ಅರಿಯಲು ಮತ್ತು ಶಿಕ್ಷಕರಿಗೆ ಹೊಸ ಮಾಹಿತಿ ತರಲು ಮಕ್ಕಳು ಕಾಡಿನಲ್ಲಿ ಸಂಚರಿಸುತ್ತಾರೆ; ಕಬೀರ ಮತ್ತು ರಹೀಮರ ದ್ವಿಪದಿಗಳು ಅವರಿಗೆ ಕಂಠಪಾಠವಾಗಿವೆ. ಪ್ರಾಥಮಿಕ ವಿಭಾಗದ ಮಕ್ಕಳಿಗೂ ಸಹ ಅವುಗಳ ಅರ್ಥ ಚೆನ್ನಾಗಿ ತಿಳಿದಿದೆ. ಸರ್ಖೇತ್ ಪ್ರಾಥಮಿಕ ಶಾಲೆಯ ಒಂದನೇ ತರಗತಿಯ ರಾಹುಲ್ ಶಾಲೆಯನ್ನು ತಲಪಲು ಪ್ರತಿದಿನ ಆರು ಕಿಲೋಮೀಟರ್ ಕ್ರಮಿಸುತ್ತಾನೆ; ಒಂದು ನದಿಯನ್ನು ಸಹ ದಾಟುತ್ತಾನೆ – ಶಾಲೆಗೆ ಬರಬೇಕೆಂಬ ಅವನ ಸಂಕಲ್ಪ ಮತ್ತು ಆಸಕ್ತಿ ಖಂಡಿತಕ್ಕೂ ಒಂದು ಅನನ್ಯ ಕಥೆ. ನಿಸ್ಸಂಶಯವಾಗಿ ಮತ್ತು ಖಂಡಿತವಾಗಿ ಇಲ್ಲಿ ಹಲವು 'ರಾಹುಲ್ ಗಳು' ಇದ್ದಾರೆ.

ಈ ಮಕ್ಕಳಿಗೆ ಶಾಲೆಗೆ ಬರಬೇಕೆಂಬ ಆಸಕ್ತಿ ತುಂಬ ಇದೆ ಎಂಬುದು ಸ್ಪಷ್ಟ. ಆ ಆಸಕ್ತಿಯನ್ನು ಹುಟ್ಟಿಸುವ ಮೂಲಕ ಶಾಲೆಗಳು ತಮ್ಮ ಮೊದಲ ಕಾರ್ಯವನ್ನು ನಿರ್ವಹಿಸುವುದರಲ್ಲಿ ಯಶಸ್ಸು ಕಂಡಿವೆ. ಇದಾದ ಅನಂತರ ಶಾಲೆಯ ಒಳಗೆ ಹೋದೆವಾದರೆ ಶಾಲೆಯ ಇನ್ನಿತರ ಕಾರ್ಯಗಳೂ ನೆರವೇರಿವೆ ಎನಿಸುತ್ತದೆ. ಉತ್ತರಾಖಂಡ್ ನಲ್ಲಿ ನಾನು ಭೇಟಿ ನೀಡಿದ ಹಲವಾರು ಶಾಲೆಗಳಲ್ಲಿ ಶಿಕ್ಷಕರು ಅನೇಕ ಚಿಂತೆ ಮತ್ತು ಆತಂಕಗಳಿಂದ ಮುಕ್ತರಾಗಿರುವುದನ್ನು ನಾನು ಗಮನಿಸಿದೆ. ಅವರು ತಮ್ಮ ಕೆಲಸದಲ್ಲಿ ಆನಂದವನ್ನು ಕಾಣುತ್ತಾರೆ; ಅವರ ಪ್ರತಿಫಲವು ಮಕ್ಕಳ ಕಣ್ಣುಗಳಲ್ಲಿನ ಹೊಳಪಿನಲ್ಲಿದೆ ಎಂದು ಭಾವಿಸುತ್ತಾರೆ.

ನಾನು ೨೦೧೨ರಲ್ಲಿ ಮೊದಲ ಬಾರಿಗೆ ಉತ್ತರಾಖಂಡದ ಶಾಲೆಯೊಂದಕ್ಕೆ ಭೇಟಿ ನೀಡಲು ಹೋಗುತ್ತಿದ್ದಾಗ ಏದುಸಿರಿನಿಂದ ಆಗಾಗ ವಿಶ್ರಾಂತಿ ಪಡೆಯಲು ಕುಳಿತುಕೊಳ್ಳುತ್ತಿದ್ದೆ. ಆಗೆಲ್ಲ ನನ್ನ ಜೊತೆಯಾಗಿದ್ದ ಶಿಕ್ಷಕರೊಬ್ಬರು ಒಮ್ಮೆ ನಾವು ಶಾಲೆಯನ್ನು ತಲಪಿದೆವೆಂದರೆ ನನ್ನೆಲ್ಲಾ ಆಯಾಸವೂ ಮಾಯವಾಗುತ್ತದೆ ಎಂದರು. ನಾನಾಗ ಅವಳನ್ನು ನಂಬಿರಲಿಲ್ಲ. ಆದರೆ ಶಾಲೆಯನ್ನು ತಲಪಿದ್ದೇ ನನ್ನ ದಣಿವು ಯಕ್ಷಿಣಿಯಂತೆ ಮಾಯವಾಯಿತು. ನಿಜಕ್ಕೂ ಶಾಲೆಯೊಂದು ಇಷ್ಟು ಸುಂದರವಾಗಿರಲು ಸಾಧ್ಯವೇ ಎಂದು ನಾನು ಆಶ್ಚರ್ಯಪಟ್ಟೆ.

ಸ್ವತಃ ನಾನು ಓದಿದ್ದೂ ಒಂದು ಸರ್ಕಾರಿ ಶಾಲೆಯಲ್ಲೇ. ಆದರೆ ಇಂತಹ ಶಾಲೆಯೊಂದು ನಿಜಕ್ಕೂ ಇರಬಹುದೆಂಬ ಕಲ್ಪನೆ ನನಗಿರಲಿಲ್ಲ. ಇಲ್ಲಿ ಮಕ್ಕಳಲ್ಲಿ ಸ್ವಂತಿಕೆ ಇತ್ತು. ಅವರು ಏನನ್ನೇ ಮಾಡಿದರೂ ಅದು ಸಂಪೂರ್ಣ ಸ್ವಾತಂತ್ರ್ಯದಿಂದ ಮಾಡಿದ್ದಾಗಿತ್ತು. ಅಧ್ಯಯನ ಮಾಡುವುದು ಅವರಿಗೆ ಆನಂದದ ಸಂಗತಿಯಾಗಿತ್ತು; ತುಂಬ ಪ್ರಶ್ನೆಗಳನ್ನು ಅವರು ಕೇಳಿದರು.

ಅನೇಕ ಕರ್ಾರಿ ಶಾಲೆಗಳಿಗೆ ಭೇಟಿ ನೀಡಿದ ಅನಂತರ ಅವುಗಳ ಅನನ್ಯತೆ ಮತ್ತು ಸೌಂದರ್ಯವೆಂದರೆ ಅಲ್ಲಿ ಓದುವ ವಿದ್ಯಾರ್ಥಿಗಳ ಆತ್ಮವಿಶ್ವಾಸ ಮತ್ತು ಸ್ವಂತಿಕೆಯೇ ಎಂದು ನನಗೆ ಮನವರಿಕೆಯಾಗಿದೆ. ಕಾರ್ಖಾನೆಯಲ್ಲಿ ಉತ್ಪಾದಿಸಲ್ಪಟ್ಟ ಸರಕಿನಂತೆ ಏಕಪ್ರಕಾರವಾಗಿ ಕಾಣುವುದಿಲ್ಲ ಅವರು. ಅವರ ಮಾತು ಅನನ್ಯ; ವರ್ತನೆ ವಿಶಿಷ್ಟ. ಶಿಕ್ಷಕರೊಂದಿಗೆ ಸ್ನೇಹ ಬೆಳೆಸುವ ಅವರು ಶಿಕ್ಷಕರು ತಪ್ಪಿದಾಗ ಅವರ ಗಮನಕ್ಕೆ ತರುತ್ತಾರೆ ಕೂಡ. ಇಂತಹ ವಾತಾವರಣವನ್ನು ಪೋಷಿಸಿದ ಕೀರ್ತಿ ಆ ಶಿಕ್ಷಕರಿಗೆ ಸಲ್ಲುತ್ತದೆ ಎಂಬುದು ಸ್ಪಷ್ಟ.

ದಿನವಿಡೀ ಕೇವಲ ಕಡಲೆಕಾಯಿ ತಿನ್ನುತ್ತಲೋ ಸ್ವೆಟರ್ ಹೆಣೆಯುತ್ತಲೋ ಇರುವ ಶಿಕ್ಷಕರ ಬಗೆಗಿರುವ ಕಲ್ಪನೆಯನ್ನು ಈ ಶಿಕ್ಷಕರು ಸುಳ್ಳಾಗಿಸಿದ್ದಾರೆ ಎಂಬುದು ಸ್ಪಷ್ಟ. ಇವರು ಪೂರ್ಣ ಪ್ರಾಮಾಣಿಕತೆಯಿಂದ ಕಲಿಸುತ್ತಾರೆ. ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿನ ಅನಂತರ (post–NCF) ದ ಪರಿಸ್ಥಿತಿಯನ್ನು ಗಮನಿಸಿದರೆ ಸರ್ಕಾರಿ ಶಾಲೆಗಳೇ 'ಆನಂದ ಶಾಲಾ' ಅಥವಾ ಕನಸಿನ ಶಾಲೆಯ ಆದರ್ಶವನ್ನು ವಾಸ್ತವವಾಗಿಸುವತ್ತ ವೇಗವಾಗಿ ಚಲಿಸುತ್ತಿವೆ. ಈ ಬಗೆಯ ಸರ್ಕಾರಿ ಶಾಲೆಗಳ ಉದಾಹರಣೆಗಳು ಕಡಮೆ ಇರಬಹುದು. ಆದರೆ ಕನಿಷ್ಠ ಈ ಶಾಲೆಗಳ ಶಿಕ್ಷಕರಾದರೂ ಇಚ್ಛಾಶಕ್ತಿಯೊಂದಿದ್ದರೆ ಯಾವುದೂ ಅಸಾಧ್ಯವಲ್ಲ ಎಂಬುದನ್ನು ತೋರಿಸಿಕೊಟ್ಟಿದ್ದಾರೆ.

ಅಸಮಾಧಾನ ವ್ಯಕ್ತಪಡಿಸುತ್ತಿರುವ ಶಿಕ್ಷಕರ ಸಂಖ್ಯೆ ಹೆಚ್ಚುತ್ತಲೇ ಇದೆ. ಅವರ ಅಸಮಾಧಾನ ಮತ್ತು ಕಾಳಜಿಗಳು ಗಂಭೀರ ಮತ್ತು ನ್ಯಾಯಬದ್ಧವೇ. ಕೇವಲ ಕೆಲವು ಶಿಕ್ಷಕರು ವಿದ್ಯಾರ್ಥಿ ಹಾಗೂ ಸಮುದಾಯದೊಂದಿಗೆ ಬಾಂಧವ್ಯವನ್ನು ಕಟ್ಟಿಕೊಳ್ಳುತ್ತಾ ತಮ್ಮ ಕೆಲಸವನ್ನು ಪ್ರಾಮಾಣಿಕವಾಗಿ ಮತ್ತು ಸಂತೋಷದಿಂದ ಮಾಡುತ್ತಿದ್ದಾರೆ ಎಂದು ಕಾಣುವ ಮಾತ್ರಕ್ಕೆ ಅವರ ಪರಿಸ್ಥಿತಿಯು ತೀವ್ರವಾಗಿ ಬದಲಾಗಿದೆ ಎಂದೇನಲ್ಲ. ಈ ಎರಡೂ ವಾಸ್ತವಗಳ ನಡುವಿನ ಅಂತರವನ್ನು ಸರಿಪಡಿಸುವುದು ಮುಖ್ಯ. ಕೆಲವು ಶಿಕ್ಷಕರ ಉಲ್ಲಾಸಕ್ಕಿರುವ ಪ್ರೇರಣೆ ಏನು ಮತ್ತು ಅದು ಎಲ್ಲಿಂದ ಬರುತ್ತಿದೆ ಎಂಬುದನ್ನು ನಾವು ತಿಳಿಯಬೇಕು. ಏಕೆಂದರೆ, ಅಂತಹ ಸನ್ನಿವೇಶಗಳನ್ನು ವಿಸ್ತರಿಸಿ ಇತರ ಶಿಕ್ಷಕರನ್ನು ಪ್ರೇರೇಪಿಸುವ ನಿಟ್ಟಿನಲ್ಲಿ ಮುಂದೆ ಅದೊಂದು ಮುಖ್ಯ ಹೆಜ್ಜೆ ಆಗಬಹುದು.

ಸರ್ಖೇತ್ ಪ್ರಾಥಮಿಕ ಶಾಲೆಯ ಶಿಕ್ಷಕಿ ಹೇಮಲತಾ ಅವರು, "ಮಕ್ಕಳು ದೂರದ ಸ್ಥಳಗಳಿಂದ ಅಷ್ಟೆಲ್ಲ ದೂರ ನಡೆದು ನಮ್ಮ ಬಳಿಗೆ ಬರುವಾಗ ನಾವು ಅವರ ಸಮಯವನ್ನು ವ್ಯರ್ಥ ಮಾಡಿದರೆ ಅದು ಪಾಪವಲ್ಲವೇ?" ಎಂದು ನಮ್ಮಲ್ಲಿ ತೋಡಿಕೊಂಡರು. ಸೋರುತ್ತಿರುವ ಶಾಲೆಯ ಛಾವಣಿ, ಮಕ್ಕಳ ಮಧ್ಯಾಹ್ನದ ಊಟ ಮತ್ತು ಅದರ ಗುಣಮಟ್ಟ, ಜೊತೆಗೆ ಮಕ್ಕಳ ಕಲಿಕೆಯ ಮಟ್ಟ ಕೂಡ ಅವರ ಚಿಂತೆಗೆ ಕಾರಣವಾಗಿತ್ತು. ದ್ವಾರಾ ಪ್ರಾಥಮಿಕ ಶಾಲೆಯ ಶಿಕ್ಷಕಿ ದೀಪ್ತಿ ರಾಮೋಲಾ ಅವರು, "ನಾವೆಷ್ಟೇ ಕೆಲಸ ಮಾಡಿದರೂ ಜನರು ಸದಾ ನಮ್ಮನ್ನು ಸ್ವೆಟರ್ ಹೆಣೆಯುವವರಾಗೇ ಕಾಣುತ್ತಾರೆ. ಆದರೆ ಈಗ ನಾವು ಈ ಪೂರ್ವಾಗ್ರಹಗಳನ್ನು ತಳ್ಳಿಹಾಕುತ್ತೇವೆ. ಮೊದಲೆಲ್ಲ ನಾನು ಕೋಪಗೊಳ್ಳುತ್ತಿದ್ದೆ, ಆದರೆ ಈಗ ನಾನು ಅದನ್ನು ಅವಗಣಿಸುತ್ತೇನೆ" ಎನ್ನುತ್ತಾರೆ.

ಬದಲಾಗಬೇಕಾದವರು ಶಿಕ್ಷಕರಷ್ಟೇ ಅಲ್ಲ; ಶಿಕ್ಷಕರನ್ನು ಕುರಿತ ಸಾಮಾಜಿಕ ಗ್ರಹಿಕೆಯೂ ಗಮನಾರ್ಹ ಬದಲಾವಣೆಗೆ ಒಳಗಾಗಬೇಕಿದೆ. ವಿಶ್ವಾಸವಿಡುವ ಮನೋಭಾವವನ್ನು ನಾವು ಬೆಳೆಸಿಕೊಳ್ಳಬೇಕು.

**ಪ್ರತಿಭಾ** ಅವರು ಡೆಹರಾಡೂನಿನ ಅಜೀಮ್ ಪ್ರೇಮ್ ಜಿ ಫೌಂಡೇಶನ್ ನಲ್ಲಿ ಭಾಷಾ ಸಂಪನ್ಮೂಲ ವ್ಯಕ್ತಿಯಾಗಿದ್ದಾರೆ. ಅವರು ಫೌಂಡೇಶನ್ನಿನ ಪ್ರಕಟಣಾ ತಂಡದ ಭಾಗವಾಗಿದ್ದಾರಲ್ಲದೆ ಆಂತರಿಕ ನಿಯತಕಾಲಿಕೆಗಳಾದ 'Pravaah' ಮತ್ತು 'Ummeed Jagaate Shikshak' ಇವುಗಳ ಸಂಪಾದಕೀಯ ತಂಡದ ಸದಸ್ಯರಾಗಿದ್ದಾರೆ. ಅವರು ಕಲ್ಪಿತಕಥನಸಾಹಿತ್ಯ ಬರಹಗಾರರು, ಕವಿ ಮತ್ತು ಬ್ಲಾಗರ್. ಆಕೆಯನ್ನು pratibha.katiyar@azimpremjifoundation.org ನಲ್ಲಿ ಸಂಪರ್ಕಿಸಬಹುದು.